# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1460 (1714)
ಸದಸ್ಯರ ಹೆಸರು : ಡಾ. ವೈ.ಎ.ನಾರಾಯಣಸ್ವಾಮಿ (ಶಿಕ್ಷಕರ ಕ್ಷೇತ್ರ)
ಉತ್ತರಿಸುವ ದಿನಾಂಕ : 14-03-2022
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು.

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದಲ್ಲಿ ಸರ್ಕಾರ ಖಾಸಗಿ ಶಿಕ್ಷಣ ಸಂಸ್ಥೆಗಳಿಗೆ ಅನುದಾನ ನೀಡುತ್ತಿದ್ದು, 1982 ರಿಂದ ಸ್ಥಗಿತಗೊಳಿಸಿರುವುದು ನಿಜವೇ; ಹಾಗಿದ್ದಲ್ಲಿ, 2006 ರಿಂದ 2008ರಲ್ಲಿ ಅಂದಿನ ಸರ್ಕಾರ 1993 ರಿಂದ 1995ರವರೆಗೆ ಕನ್ನಡ ಮಾಧ್ಯಮ ಶಾಲಾ ಕಾಲೇಜುಗಳಿಗೆ ಅನುದಾನವನ್ನು ನೀಡದಿರಲು ಕಾರಣವೇನು; | ಇಲ್ಲ<br><br>1994-95ನೇ ಶೈಕ್ಷಣಿಕ ಸಾಲಿನವರೆಗೆ ಅನುದಾನರಹಿತವಾಗಿ ಕನ್ನಡ ಮಾಧ್ಯಮದಲ್ಲಿ ಶಾಲೆ ಪ್ರಾರಂಭಿಸಿ ವಿಚ್ಛಿನ್ನತೆ ಇಲ್ಲದೇ ನಡೆದಿರುವ ಪ್ರಾಥಮಿಕ ಮತ್ತು ಪ್ರೌಢಶಾಲೆಗಳನ್ನು ಸಹಾಯಾನುದಾನಕ್ಕೊಳಪಡಿಸಲು ಅವಕಾಶ ಕಲ್ಪಿಸಲಾಗಿದೆ. |
| (ಆ) | ಅಂದಿನ ಸರ್ಕಾರ 1995ರ ನಂತರ ಪ್ರಾರಂಭವಾದ ಅನುದಾನ ರಹಿತ ಕನ್ನಡ ಮಾಧ್ಯಮ ಶಾಲಾ ಕಾಲೇಜುಗಳನ್ನು ಅನುದಾನಕ್ಕೆ ಒಳಪಡಿಸದಿರುವುದರಿಂದ ಕನ್ನಡ ಶಾಲೆಗಳು ಮುಚ್ಚುವ ಸ್ಥಿತಿಗೆ ಬಂದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿಲ್ಲ. |
| (ಇ) | ರಾಜ್ಯದ ಅನುದಾನ ರಹಿತ ಕನ್ನಡ ಶಾಲೆ ಹಾಗೂ ಕನ್ನಡ ಭಾಷೆ ಉಳಿವಿಗೆ ಸರ್ಕಾರವು ಇನ್ನಾದರೂ ಕನ್ನಡ ಮಾಧ್ಯಮ ಶಾಲಾ ಕಾಲೇಜುಗಳಿಗೆ ಅನುದಾನ ನೀಡುವುದಕ್ಕೆ ಕ್ರಮ ತೆಗೆದುಕೊಳ್ಳಬಹುದೇ? | ಕೋವಿಡ್-19 ನಿಮಿತ್ತ ಸರ್ಕಾರದ ಸುತ್ತೋಲೆ ಸಂಖ್ಯೆ:ಆಇ 157 ವೆಚ್ಚ-8/2020, ದಿನಾಂಕ:10/06/2020ರ ಪ್ರಕಾರ ಯಾವುದೇ ಹೊಸ ಅನುದಾನರಹಿತ ಶಾಲಾ-ಕಾಲೇಜುಗಳನ್ನು ಸಹಾಯಾನುದಾನಕ್ಕೊಳಪಡಿಸುವಂತಿಲ್ಲ ಎಂದು ಆರ್ಥಿಕ ನಿರ್ಬಂಧವನ್ನು ವಿಧಿಸಲಾಗಿದೆ.<br><br>ಸರ್ಕಾರದ ಪತ್ರ ಸಂಖ್ಯೆ:ಇಪಿ 445 ಪಿಬಿಎಸ್ 2021, ದಿನಾಂಕ:19.01.02022ರಲ್ಲಿ 1995ಕ್ಕೂ ಪೂರ್ವದಲ್ಲಿ ಪ್ರಾರಂಭವಾಗಿ ಸತತವಾಗಿ ನಡೆದುಕೊಂಡು ಬಂದ ಪ್ರಾಥಮಿಕ ಮತ್ತು ಪ್ರೌಢಶಾಲೆಗಳನ್ನು ಸಹಾಯಾನುದಾನಕ್ಕೊಳಪಡಿಸುವ ಸಂಬಂಧ ಬಾಕಿ ಇರುವ ಅರ್ಹ ಪ್ರಸ್ತಾವನೆಗಳನ್ನು ದಿನಾಂಕ:31.03.2022ರ ಒಳಗಾಗಿ ಸರ್ಕಾರಕ್ಕೆ ಸಲ್ಲಿಸುವಂತೆ ಸೂಚಿಸಲಾಗಿದೆ. |

ಸಂಖ್ಯೆ:ಇಪಿ 98 ಎಸ್‌ಇಎಸ್ 2022

(ಬಿ.ಸಿ.ನಾಗೇಶ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ
ಹಾಗೂ ಸಕಾಲ ಸಚಿವರು